**ಆದೇಶ ಸಂಖ್ಯೆ: ಇಎಕ್ಸ್‌ಇ:30:2001-2002 ದಿನಾಂಕ: 3ನೇ ಡಿಸೆಂಬರ್ 2004**

ಶ್ರೀ ಎನ್. ಬಿ. ಖೋಜಾ, ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ಆದ ನಾನು ಅಬಕಾರಿ ಕಾಯ್ದೆ 1965ರ ಕಲಂ 43 ಎ ಅಡಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಇನ್ಸ್‌ಪೆಕ್ಟರ್, ಬೈಲಹೊಂಗಲ ವಲಯ ಇವರ ಮೊಕದ್ದಮೆ ಸಂಖ್ಯೆ: 3/2001-02 ದಿನಾಂಕ: 16.7.2001 ರಲ್ಲಿ ಜಪ್ತಾದ ಆಟೋರಿಕ್ಷಾ ವಾಹನ ಸಂ. ಎಂಎಚ್‌ಎಲ್-6735 ಮತ್ತು 64.800 ಲೀ. ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸಿದ್ದೇನೆ.

ಈ ಆದೇಶವು ದಿನಾಂಕ: 3.12.2004 ರಿಂದ 30 ದಿನಗಳ ನಂತರ ಜಾರಿಗೆ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,

ಪಿ.ಆರ್. 254 ಬೆಳಗಾಂ ಜಿಲ್ಲೆ, ಬೆಳಗಾಂ.

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಬೆಳಗಾಂ ಜಿಲ್ಲೆ, ಬೆಳಗಾಂ ಇವರ ನ್ಯಾಯಾಲಯದಲ್ಲಿ**

**ಗುನ್ಹೆ ನಂ:97/2000-01 ದಿನಾಂಕ: 12ನೇ ಜೂನ್ 2001**

**ಫಿರ್ಯಾದುದಾರರು :** **ವಿರುದ್ಧ :** **ಅರ್ಜಿದಾರರು:**

ಪಿ.ಎಸ್.ಐ., 1. ವಾಹನ ಮಾಲೀಕರು ಯಾರು ಎಂದು ತಿಳಿದು ಬಂದಿಲ್ಲ.

ಯಮಕನಮರ್ಡಿ ಪಿ. ಎಸ್.

ದಿನಾಂಕ: 12.6.2001 ರಂದು ಹಿಡಕಲ್ ಡ್ಯಾಮದ ಐ. ಬಿ. ಹತ್ತಿರ ಮೆಟಡೋರ್ ಟೆಂಪೋ ನಂ. ಸಿಆರ್‌ಕ್ಯೂ-7310 ಇದರಲ್ಲಿ 950.400 ಲೀ. ಮದ್ಯವನ್ನು ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದ ಆರೋಪದ ಮೇಲೆ ಫಿರ್ಯಾದುದಾರರು ತಮ್ಮ ಪೊಲೀಸ್ ಠಾಣೆಯ ಮೊಕದ್ದಮೆ ಸಂ. 97/2000-01 ಅಬಕಾರಿ ಕಾಯ್ದೆ 1965ರ ಕಲಂ 32, 34 ರಂತೆ ಕ್ರಮ ಜರುಗಿಸಿ ದಾಖಲಾತಿ ಹಾಗೂ ಮುದ್ದೆಮಾಲನ್ನು ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರಕ್ಕೆ ವಹಿಸಿಕೊಟ್ಟಿದ್ದರು.

ಕಡತವನ್ನು ಪರಿಶೀಲಿಸಲಾಯಿತು ಜಪ್ತಾದ ವಾಹನ ಮಾಲೀಕರ ಹೆಸರು ಹಾಗೂ ವಿಳಾಸಕ್ಕಾಗಿ ಬೆಂಗಳೂರು ವ್ಯಾಪ್ತಿಯ ಎಲ್ಲ ಆರ್.ಟಿ.ಓ. ಕಚೇರಿಗಳಿಗೆ ಪತ್ರ ಬರೆಯಲಾಗಿ ಅವರು ಸದರಿ ಜಪ್ತಾದ ವಾಹನ ಮಾಲೀಕರ ಮಾಹಿತಿಯು ತಮ್ಮ ಕಚೇರಿಯಲ್ಲಿ ಲಭ್ಯವಿಲ್ಲವೆಂದು ಲಿಖಿತವಾಗಿ ಉತ್ತರ ಸಲ್ಲಿಸಿರುತ್ತಾರೆ. ಅಲ್ಲದೇ ಈ ಪ್ರಕರಣದಲ್ಲಿ ಜಪ್ತಾದ ವಾಹನ ಮಾಲೀಕರು ಇಲ್ಲಿಯವರೆಗೆ ಯಾವುದೇ ಪ್ರತಿಕ್ರಿಯೆ ನೀಡದೇ ಇರುವುದು ಅಬಕಾರಿ ಕಾಯ್ದೆಯ ಉಲ್ಲಂಘನೆಗಾಗಿ ವಾಹನ ಹಾಗೂ ಮದ್ಯವನ್ನು ಬಳಸಿರುವುದು ಮೇಲ್ನೋಟಕ್ಕೆ ಕಂಡುಬಂದಿರುತ್ತದೆ.

ಕಡತ ಪರಿಶೀಲಿಸಲಾಯಿತು. ಹಾಜರಿದ್ದ ಮಾನ್ಯ ಎ.ಡಿ.ಪಿ.ಯವರು ಫಿರ್ಯಾದುದಾರರ ಪರವಾಗಿ ವಾದವನ್ನು ಮಂಡಿಸಿರುತ್ತಾರೆ. ಇವರ ಪ್ರಕಾರ ಈ ಕಡತದಲ್ಲಿ ಕೆಳಕಂಡ ದಾಖಲಾತಿಗಳು ಲಭ್ಯವಿರುತ್ತದೆ.

1) ಪ್ರಥಮ ವರ್ತಮಾನ ವರದಿ
2) ಮಹಜರು ಕ್ರಮ
3) ಮಾಲುಪಟ್ಟಿ
4) ರಾಸಾಯನಿಕ ತಜ್ಞರ ವರದಿ

ಮೇಲ್ಕಂಡ ದಾಖಲಾತಿಗಳ ಆಧಾರದ ಮೇಲೆ ಮಾನ್ಯ ಎ.ಡಿ.ಪಿ.ಯವರು ಸಲ್ಲಿಸಿದ್ದು ಏನೆಂದರೆ ದಿನಾಂಕ: 12.6.2001 ರಂದು ಯಾವುದೇ ಪರವಾನಿಗೆ ಇಲ್ಲದೇ 950.400 ಲೀ. ಮದ್ಯವನ್ನು ಮೆಟಡೋರ್ ಟೆಂಪೋ ನಂ. ಸಿಆರ್‌ಕ್ಯೂ-7310 ರಲ್ಲಿ ಸಾಗಾಣಿಕೆ ಮಾಡುತ್ತಿದ್ದಾಗ ಫಿರ್ಯಾದುದಾರರು ಪಂಚರ ಸಮಕ್ಷಮ ಜಪ್ತು ಮಾಡಿ ಕ್ರಮ ಜರುಗಿಸಿರುತ್ತಾರೆ. ಈ ಅಂಶಗಳನ್ನು ಯಾರೂ ಪ್ರಶ್ನಿಸಿರುವುದಿಲ್ಲ. ಮೇಲಾಗಿ ಈ ಪ್ರಕರಣ ದಾಖಲಾಗಿ ಮೂರು ವರ್ಷಕ್ಕೂ ಹೆಚ್ಚಿನ ಸಮಯ ಸಂದಿದ್ದು, ವಾಹನ ಹಾಗೂ ಮದ್ಯದ ಮಾಲೀಕತ್ವವನ್ನು ಕೋರಿ ಯಾರೂ ಮುಂದೆ ಬಂದಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಅಬಕಾರಿ ಕಾಯ್ದೆ ಉಲ್ಲಂಘನೆಗಾಗಿ ವಾಹನ ಹಾಗೂ ಮದ್ಯ ಬಳಸಿರುವುದು ಕಂಡುಬಂದಿರುವುದಲ್ಲದೇ ಮಾಲೀಕತ್ವ ಕೋರಿ ಯಾರೂ ಮುಂದೆ ಬಂದಿಲ್ಲವಾದ ಕಾರಣ ಪ್ರಕರಣವನ್ನು 43 ಸಿ ನಂತೆ ಮುಕ್ತಾಯಗೊಳಿಸಲು ಕೋರಿರುತ್ತಾರೆ. ಇವರ ವಾದಕ್ಕೆ ಮನ್ನಣೆ ಸಿಗಬೇಕಾಗಿದ್ದು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: 524/2000-2001 ದಿನಾಂಕ: 3ನೇ ಡಿಸೆಂಬರ್ 2004**

ಶ್ರೀ ಎನ್. ಬಿ. ಖೋಜಾ, ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ಆದ ನಾನು ಅಬಕಾರಿ ಕಾಯ್ದೆ ಕಲಂ 43 ಸಿ ಅಡಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಇನ್ಸ್‌ಪೆಕ್ಟರ್, ಹುಕ್ಕೇರಿ ವಲಯ ಇವರ ಮೊಕದ್ದಮೆ ಸಂಖ್ಯೆ: 97/2000-01 ದಿನಾಂಕ: 12.6.2001 ಈ ಪ್ರಕರಣದಲ್ಲಿ ಜಪ್ತಾದ ಮೆಟಡೋರ್ ಟೆಂಪೋ ನಂ. ಸಿಆರ್‌ಕ್ಯೂ-7310 ಹಾಗೂ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸಿದ್ದೇನೆ.

ಈ ಆದೇಶವು ಇಂದಿನಿಂದ ದಿನಾಂಕ: 3.12.2004 ರಿಂದ 30 ದಿನಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,

ಪಿ.ಆರ್. 255 ಬೆಳಗಾಂ ಜಿಲ್ಲೆ, ಬೆಳಗಾಂ.

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಬೆಳಗಾಂ ಜಿಲ್ಲೆ ಇವರ ನ್ಯಾಯಾಲಯದಲ್ಲಿ**

**ಪ್ರಕರಣ ಸಂಖ್ಯೆ:ಇಎಕ್ಸ್‌ಇ:ಡಿಟಿಸಿಆರ್:147:2000-01**

**ಫಿರ್ಯಾದುದಾರರು :** **ವಿರುದ್ಧ :** **ಅರ್ಜಿದಾರರು:**

ಅಬಕಾರಿ ನಿರೀಕ್ಷಕರು, ಖಾನಾಪುರ

**ಪ್ರಕರಣದ ಸಂಕ್ಷಿಪ್ತ ವಿವರ:**

ಅಬಕಾರಿ ನಿರೀಕ್ಷಕರು, ಖಾನಾಪುರ ಇವರು ದಿನಾಂಕ: 17.10.2000 ರಂದು ನಂದಗಡ ದಿಂದ ಖಾನಾಪುರಕ್ಕೆ ಬರುವ ರಸ್ತೆ ಮೇಲೆ ರುಮೇವಾಡಿ ಫಾರೆಸ್ಟ್ ನಾಕಾದಿಂದ ಅರ್ಧ ಕಿ.ಮೀ. ಅಂತರದಲ್ಲಿ ಅಂಬಾಸಿಡರ್ ಕಾರ್ ನಂ. ಎಂಇಆರ್-1004ರಲ್ಲಿ 103.680 ಲೀಟರ್ ಮದ್ಯವನ್ನು

ಅನಧಿಕೃತವಾಗಿ ಸಾಗಾಣಿಕೆ ಮಾಡುತ್ತಿದ್ದರು ಎಂಬ ಆರೋಪದ ಮೇಲೆ ವಾಹನವನ್ನು ವಶಪಡಿಸಿಕೊಂಡು ಗುನ್ಹೆ ಸಂಖ್ಯೆ: 5/2000-01ನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32,34ರ ಉಲ್ಲಂಘನೆಗಾಗಿ ದಾಖಲು ಮಾಡಿಕೊಂಡು ಕ್ರಮ ಜರುಗಿಸಲಾಗಿದೆ.

ಈ ಪ್ರಾಧಿಕಾರ ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಿ ಅಬಕಾರಿ ಕಾಯ್ದೆ ಕಲಂ 34ರ ಉಲ್ಲಂಘನೆಯಾಗಿರುವುದು ಹಾಗೂ ಅದಕ್ಕಾಗಿ ವಾಹನ ಬಳಸಿರುವುದು ಮೇಲ್ನೋಟಕ್ಕೆ ಕಂಡುಬಂದ ಈ ಪ್ರಾಧಿಕಾರ ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಿ ಅಬಕಾರಿ ಕಾಯ್ದೆ ಕಲಂ 34ರ ಉಲ್ಲಂಘನೆಯಾಗಿರುವುದು ಹಾಗೂ ಅದಕ್ಕಾಗಿ ವಾಹನ ಬಳಸಿರುವುದು ಮೇಲ್ನೋಟಕ್ಕೆ ಕಂಡುಬಂದ ಕಾರಣ ಕಲಂ 43 ಬಿ ಅಡಿ ಕಾರಣ ಕೇಳಿ ನೋಟೀಸನ್ನು ದಿನಾಂಕ: 16.11.2000 ರಂದು ಈ ಕಡತದಲ್ಲಿ ಲಭ್ಯವಿರುವ ವಾಹನ ಮಾಲೀಕರ ವಿಳಾಸಕ್ಕೆ ಕಳುಹಿಸಲಾಗಿತ್ತು. ಸದರಿ ನೋಟಿಸಿಗೆ ಯಾವುದೇ ಪ್ರತಿಕ್ರಿಯೆಯನ್ನು ಅರ್ಜಿದಾರರು ನೀಡಿರುವುದಿಲ್ಲ. ಮಾನ್ಯ ಎ.ಡಿ.ಪಿ. ರವರು ಅಬಕಾರಿ ಕಾಯ್ದೆ ಕಲಂ 43 ಸಿ ಅಡಿ 30 ದಿನಗಳ ಅವಧಿಯ ಪೂರ್ವದಲ್ಲಿ ಮಾಲೀಕತ್ವವನ್ನು ಕೋರಿ ಯಾರೂ ಮುಂದೆ ಬರದ ಪಕ್ಷದಲ್ಲಿ ಇಂತಹ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಕಾನೂನಿನ ಅಂಶವನ್ನು ಈ ಪ್ರಾಧಿಕಾರದ ಗಮನಕ್ಕೆ ತರುತ್ತಾ ವಾಹನ ಮಾಲೀಕತ್ವವನ್ನು ಪತ್ತೆ ಹಚ್ಚಲು ತೆಗೆದುಕೊಂಡ ಕ್ರಮವನ್ನು ಮತ್ತು ಸಾಕ್ಷ್ಯಾಧಾರವನ್ನು ಪರಿಶೀಲಿಸಲು ಕೋರಿರುತ್ತಾರೆ.

ಮಾನ್ಯ ಎ.ಡಿ.ಪಿ. ರವರ ವಾದವನ್ನು ಕೇಳಲಾಗಿದೆ. ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ಮಾನ್ಯ ಎ.ಡಿ.ಪಿ. ರವರ ವಾದದಲ್ಲಿ ಸತ್ಯಾಂಶ ಇದ್ದು ಈ ಪ್ರಕರಣವನ್ನು 43 ಸಿ ಅಡಿ ಮುಕ್ತಾಯಗೊಳಿಸುವುದು ಸೂಕ್ತವೆಂದು ಕಂಡು ಬಂದ ಕಾರಣ ಈ ಕೆಳಕಂಡ ಆದೇಶ.

**ಆದೇಶ ಸಂ. 147/2000-2001**

ಎನ್. ಬಿ. ಖೋಜಾ, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಬೆಳಗಾಂ ಜಿಲ್ಲೆ ಆದ ನಾನು 1965ರ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರ ಅಡಿಯಲ್ಲಿ ನನಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಮೊಕದ್ದಮೆಯಲ್ಲಿ ಜಪ್ತಾಗಿರುವ 103.680 ಲೀಟರ್ ಮದ್ಯವನ್ನು ವಾಹನ ಸಂಖ್ಯೆ ಅಂಬಾಸಿಡರ್ ಕಾರ್ ನಂ. ಎಂಇಆರ್-1004ನ್ನು 1965ರ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರೀತ್ಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸಿದೆ.

ಈ ಆದೇಶವನ್ನು ದಿನಾಂಕ: 3.12.2004 ರಂದು ಉಕ್ತಲೇಖನ ನೀಡಿ ತಪ್ಪುಗಳನ್ನು ತಿದ್ದಿ ನಂತರ ಮುಕ್ತ ನ್ಯಾಯಾಲಯದಲ್ಲಿ ನನ್ನಿಂದ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ದಿನಾಂಕ: 3.12.2004 ರಿಂದ 30 ದಿನಗಳ ನಂತರ ಜಾರಿಗೆ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ಬೆಳಗಾಂ ಜಿಲ್ಲೆ, ಬೆಳಗಾಂ.

ಪಿ.ಆರ್. 256

## ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಬೆಳಗಾಂ ಜಿಲ್ಲೆ ಬೆಳಗಾಂ ಇವರ ನ್ಯಾಯಾಲಯದಲ್ಲಿ ಗುನ್ಹೆ ನಂ:10/2001-02 ದಿನಾಂಕ: 18ನೇ ಏಪ್ರಿಲ್ 2002

**ಫಿರ್ಯಾದುದಾರರು :** ಅಬಕಾರಿ ಸಬ್ ಇನ್ಸ್‌ಪೆಕ್ಟರ್, ಖಾನಾಪುರ ಉಪವಲಯ

**ವಿರುದ್ಧ :**

**ಅರ್ಜಿದಾರರು:** 1. ಶ್ರೀನಿವಾಸ ಸಹದೇವ ನಾಯಿಕ, ಸಾ: ಜಾಂಬೋಟಿ, ತಾ: ಖಾನಾಪುರ ವಾಹನ ಮಾಲೀಕರು.

ದಿನಾಂಕ: 18.4.2002 ರಂದು ಸೋರಲ (ಗೋವಾ) ದಿಂದ ಜಾಂಬೋಟಿ ಕಡೆಗೆ ಚಿಕಲಾ ಕ್ರಾಸ್‌ದ ಹತ್ತಿರ ಹಿರೋ ಹೊಂಡಾ ಸ್ಪ್ಲೆಂಡರ್ ವಾಹನ ಸಂ. ಕೆಎ-22-ಆರ್-1465 750 ಎಂ.ಎಲ್‌ದ 15 ಮದ್ಯ ತುಂಬಿದ ಪ್ಲಾಸ್ಟಿಕ್ ಬಾಟಲಿಗಳು ಹಾಗೂ ಹೊರರಾಜ್ಯದ ಕಿಂಗ್ಸ್ ಪ್ರಿಮಿಯಮ್ ಲೇಬಲ್ ಇದ್ದ 650 ಎಂ.ಎಲ್.ದ ಬೀರ್ ತುಂಬಿದ ಬಾಟಲಿಗಳನ್ನು ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದ ಆರೋಪದ ಮೇಲೆ ಅಬಕಾರಿ ಸಬ್ ಇನ್ಸ್‌ಪೆಕ್ಟರ್, ಖಾನಾಪುರ ಉಪವಲಯ ಇವರು ತಮ್ಮ ಮೊಕದ್ದಮೆ ಸಂ. 10/2001-02, ಅಬಕಾರಿ ಕಾಯ್ದೆ 1965ರ ಕಲಂ 32 ಮತ್ತು 34 ರಂತೆ ಕ್ರಮ ಜರುಗಿಸಿ ದಾಖಲಾತಿ ಹಾಗೂ ಮುದ್ದೆಮಾಲನ್ನು ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರಕ್ಕೆ ವಹಿಸಿಕೊಟ್ಟಿದ್ದರು.

ಕಡತ ಪರಿಶೀಲಿಸಲಾಯಿತು. ಅಬಕಾರಿ ಕಾಯ್ದೆಯ ಉಲ್ಲಂಘನೆಗಾಗಿ ಈ ಪ್ರಕರಣದಲ್ಲಿ ಜಪ್ತಾದ ವಾಹನ ಹಾಗೂ ಮದ್ಯವನ್ನು ಬಳಸಿರುವುದು ಮೇಲ್ನೋಟಕ್ಕೆ ಕಂಡುಬಂದ ಕಾರಣ ಈ ಮುದ್ದೆಮಾಲನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43 ಬಿ ರಂತೆ ಕಾರಣ ಕೇಳಿ ನೋಟೀಸನ್ನು ದಿನಾಂಕ: 31.10.2002 ರಂದು ಪ್ರತಿವಾದಿಗಳಿಗೆ ಜಾರಿ ಮಾಡಲು ಆದೇಶಿಸಲಾಗಿತ್ತು. ಸದರಿ ನೋಟೀಸಿಗೆ ಇಲ್ಲಿಯವರೆಗೆ ಪ್ರತಿವಾದಿಗಳಿಂದ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ಕಡತ ಪರಿಶೀಲಿಸಲಾಯಿತು. ಹಾಜರಿದ್ದ ಮಾನ್ಯ ಎ.ಡಿ.ಪಿ.ಯವರು ಪಿಯಾರ್ದುದಾರರ ಪರವಾಗಿ ವಾದವನ್ನು ಮಂಡಿಸಿರುತ್ತಾರೆ. ಇವರ ಪ್ರಕಾರ ಈ ಕಡತದಲ್ಲಿ ಕೆಳಕಂಡ ದಾಖಲಾತಿಗಳು ಲಭ್ಯವಿರುತ್ತವೆ.

1) ಪ್ರಥಮ ವರ್ತಮಾನ ವರದಿ
2) ಮಹಜರು ಕ್ರಮ
3) ಮಾಲು ಪಟ್ಟಿ
4) ರಾಸಾಯನಿಕ ತಜ್ಞರ ವರದಿ

ಮೇಲ್ಕಂಡ ದಾಖಲಾತಿಗಳ ಆಧಾರದ ಮೇಲೆ ಮಾನ್ಯ ಎ.ಡಿ.ಪಿ.ಯವರು ಸಲ್ಲಿಸಿದ್ದು ಏನೆಂದರೆ ದಿನಾಂಕ: 18.4.2002 ರಂದು ಯಾವುದೇ ಪರವಾನಿಗೆ ಇಲ್ಲದೇ 750 ಎಂ.ಎಲ್.ದ 15 ಮದ್ಯ ತುಂಬಿದ ಪ್ಲಾಸ್ಟಿಕ್ ಬಾಟಲಿಗಳು ಹಾಗೂ ಹೊರರಾಜ್ಯದ ಕಿಂಗ್ಸ್ ಪ್ರಿಮಿಯಮ್ ಲೇಬಲ್ ಇದ್ದ 650 ಎಂ.ಎಲ್.ದ ಬೀರ್‌ನ್ನು ಹಿರೋ ಹೊಂಡಾ ಸ್ಪ್ಲೆಂಡರ್ ವಾಹನ ಸಂಖ್ಯೆ: ಕೆಎ-22-ಆರ್-1465 ರಲ್ಲಿ ಸಾಗಾಣಿಕೆ ಮಾಡುತ್ತಿದ್ದಾಗ ಫಿರ್ಯಾದುದಾರರು ಪಂಚರ ಸಮಕ್ಷಮ ಜಪ್ತು ಮಾಡಿ ಕ್ರಮ ಜರುಗಿಸಿರುತ್ತಾರೆ. ಈ ಅಂಶಗಳನ್ನು ಯಾರೂ ಪ್ರಶ್ನಿಸಿರುವುದಿಲ್ಲ. ಮೇಲಾಗಿ ಈ ಪ್ರಕರಣ ದಾಖಲಾಗಿ ಒಂದು ವರ್ಷಕ್ಕೂ ಹೆಚ್ಚಿನ ಸಮಯ ಸಂದಿದ್ದು, ವಾಹನ ಹಾಗೂ ಮದ್ಯದ ಮಾಲೀಕತ್ವವನ್ನು ಕೋರಿ ಯಾರೂ ಮುಂದೆಬಂದಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಅಬಕಾರಿ ಕಾಯ್ದೆ ಉಲ್ಲಂಘನೆಗಾಗಿ ವಾಹನ ಹಾಗೂ ಮದ್ಯ ಬಳಸಿರುವುದು ಕಂಡುಬಂದಿರುವುದಲ್ಲದೇ ಮಾಲೀಕತ್ವ ಕೋರಿ ಯಾರೂ ಮುಂದೆ ಬಂದಿಲ್ಲವಾದ ಕಾರಣ ಪ್ರಕರಣವನ್ನು 43 ಸಿ ನಂತೆ ಮುಕ್ತಾಯಗೊಳಿಸಲು ಕೋರಿರುತ್ತಾರೆ. ಇವರ ವಾದಕ್ಕೆ ಮನ್ನಣೆ ಸಿಗಬೇಕಾಗಿದ್ದು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: 513/2001-2002 ದಿನಾಂಕ: 3ನೇ ಡಿಸೆಂಬರ್ 2004**

ಶ್ರೀ ಎನ್. ಬಿ. ಖೋಜಾ, ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ಆದ ನಾನು ಅಬಕಾರಿ ಕಾಯ್ದೆ ಕಲಂ 43 ಸಿ ಅಡಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಸಬ್ ಇನ್ಸ್‌ಪೆಕ್ಟರ್, ಖಾನಾಪುರ ವಲಯ ಇವರ ಮೊಕದ್ದಮೆ ಸಂಖ್ಯೆ: 10/2001-02 ದಿನಾಂಕ: 18.4.2002 ಈ ಪ್ರಕರಣದಲ್ಲಿ ಜಪ್ತಾದ ಹಿರೋ ಹೊಂಡಾ ಸ್ಪ್ಲೆಂಡರ್ ವಾಹನ ಸಂಖ್ಯೆ: ಕೆಎ-22-ಆರ್-1465 ಹಾಗೂ 11.250 ಬಿ.ಎಲ್ ಮತ್ತು 7,800 ಬಿ.ಎಲ್ ಬೀರ್ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸಿದ್ದೇನೆ.

ಈ ಆದೇಶವು ದಿನಾಂಕ: 3.12.2004 ರಿಂದ 30 ದಿನಗಳ ನಂತರ ಜಾರಿಗೆ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು
ಬೆಳಗಾಂ ಜಿಲ್ಲೆ, ಬೆಳಗಾಂ.

ಪಿ.ಆರ್. 257

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಬೆಳಗಾಂ ಜಿಲ್ಲೆ, ಬೆಳಗಾಂ ಇವರ ನ್ಯಾಯಾಲಯದಲ್ಲಿ**
**ಗುನ್ಹೆ ನಂ:13/2001-02 ದಿನಾಂಕ: 19ನೇ ಡಿಸೆಂಬರ್ 2001**

**ಫಿರ್ಯಾದುದಾರರು :** ಅಬಕಾರಿ ಸಬ್ ಇನ್ಸ್‌ಪೆಕ್ಟರ್, ಬೆಳಗಾಂ ಉಪ ವಿಭಾಗ

**ವಿರುದ್ಧ :**

**ಅರ್ಜಿದಾರರು:**
1. ಶ್ರೀ ಬಾಬಾಜಿ ದಾದಾಜಿ ಡೆವ್ಹೋರೆ, ಮ.ನಂ.19, ವಿಜಯಾ ಬಿಲ್ಡಿಂಗ್ ನೆಹರು ನಗರ, ಗೋಕುಲ್ ರೋಡ್, ಹುಬ್ಬಳ್ಳಿ-ವಾಹನ ಮಾಲೀಕರು.

ದಿನಾಂಕ: 19.12.2001 ರಂದು ಚೋರ್ಲಾದಿಂದ ಖಾನಾಪೂರಕ್ಕೆ ಬರುವ ರಸ್ತೆಯ ಮೇಲೆ ಇರುವ ಜಾಂಬೋಟಿ ಬಸ್ ಸ್ಟಾಪ್ ಹತ್ತಿರ ಒಂದು ಮಾರುತಿ ಸುಜುಕಿ ಓಮಿನಿ ವಾಹನ ಸಂ. ಕೆಎ-25-ಎಂ-4858 ಇದರಲ್ಲಿ 207.360 ಲೀ (ನೆಪೋಲಿಯನ್ ಪೋರ್ಟ್ ವೈನ್) ಮದ್ಯವನ್ನು ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದ ಆರೋಪದ ಮೇಲೆ ಅಬಕಾರಿ ಸಬ್ ಇನ್ಸ್‌ಪೆಕ್ಟರ್, ಬೆಳಗಾಂ ಉಪ ವಿಭಾಗ ಇವರು ತಮ್ಮ ಮೊಕದ್ದಮೆ ಸಂ. 13/2001-02 ಅಬಕಾರಿ ಕಾಯ್ದೆ 1965ರ ಕಲಂ 34 ರಂತೆ ಕ್ರಮ ಜರುಗಿಸಿ ದಾಖಲಾತಿ ಹಾಗೂ ಮುದ್ದೆಮಾಲನ್ನು ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರಕ್ಕೆ ವಹಿಸಿಕೊಟ್ಟಿದ್ದರು.

ಕಡತ ಪರಿಶೀಲಿಸಲಾಯಿತು ಅಬಕಾರಿ ಕಾಯ್ದೆಯ ಉಲ್ಲಂಘನೆಗಾಗಿ ಈ ಪ್ರಕರಣದಲ್ಲಿ ಜಪ್ತಾದ ವಾಹನ ಹಾಗೂ ಮದ್ಯವನ್ನು ಬಳಸಿರುವುದು ಮೇಲ್ನೋಟಕ್ಕೆ ಕಂಡುಬಂದ ಕಾರಣ ಈ ಮುದ್ದೆಮಾಲನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43 ಬಿ ರಂತೆ ಕಾರಣ ಕೇಳಿ ನೋಟೀಸನ್ನು ದಿನಾಂಕ: 26.2.2002 ರಂದು ಪ್ರತಿವಾದಿಗಳಿಗೆ ಜಾರಿ ಮಾಡಲು ಆದೇಶಿಸಲಾಗಿತ್ತು. ಸದರಿ ನೋಟೀಸಿಗೆ ಇಲ್ಲಿಯವರೆಗೆ ಪ್ರತಿವಾದಿಗಳಿಂದ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ಕಡತ ಪರಿಶೀಲಿಸಲಾಯಿತು. ಹಾಜರಿದ್ದ ಮಾನ್ಯ ಎ.ಡಿ.ಪಿ.ಯವರು ಫಿರ್ಯಾದುದಾರರ ಪರವಾಗಿ ವಾದವನ್ನು ಮಂಡಿಸಿರುತ್ತಾರೆ. ಇವರ ಪ್ರಕಾರ ಈ ಕಡತದಲ್ಲಿ ಕೆಳಕಂಡ ದಾಖಲಾತಿಗಳು ಲಭ್ಯವಿರುತ್ತವೆ.

1) ಪ್ರಥಮ ವರ್ತಮಾನ ವರದಿ
2) ಮಹಜರು ಕ್ರಮ
3) ಮಾಲು ಪಟ್ಟಿ
4) ರಾಸಾಯನಿಕ ತಜ್ಞರ ವರದಿ

ಮೇಲ್ಕಂಡ ದಾಖಲಾತಿಗಳ ಆಧಾರದ ಮೇಲೆ ಮಾನ್ಯ ಎ.ಡಿ.ಪಿ.ಯವರು ಸಲ್ಲಿಸಿದ್ದು ಏನೆಂದರೆ ದಿನಾಂಕ: 19.12.2001 ರಂದು ಯಾವುದೇ ಪರವಾನಿಗೆ ಇಲ್ಲದೇ 203.360 ಲೀ. ಮದ್ಯವನ್ನು ಮಾರುತಿ ಸುಜುಕಿ ಓಮಿನಿ ವಾಹನ ಸಂಖ್ಯೆ: ಕೆಎ-25-ಎಂ-4858 ರಲ್ಲಿ ಸಾಗಾಣಿಕೆ ಮಾಡುತ್ತಿದ್ದಾಗ ಫಿರ್ಯಾದುದಾರರು ಪಂಚರ ಸಮಕ್ಷಮ ಜಪ್ತು ಮಾಡಿ ಕ್ರಮ ಜರುಗಿಸಿರುತ್ತಾರೆ. ಈ ಅಂಶಗಳನ್ನು ಯಾರೂ ಪ್ರಶ್ನಿಸಿರುವುದಿಲ್ಲ. ಮೇಲಾಗಿ ಈ ಪ್ರಕರಣ ದಾಖಲಾಗಿ ಮೂರು ವರ್ಷಕ್ಕೂ ಹೆಚ್ಚಿನ ಸಮಯ ಸಂದಿದ್ದು, ವಾಹನ ಹಾಗೂ ಮದ್ಯದ ಮಾಲೀಕತ್ವವನ್ನು ಕೋರಿ ಯಾರೂ ಮುಂದೆಬಂದಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಅಬಕಾರಿ ಕಾಯ್ದೆ ಉಲ್ಲಂಘನೆಗಾಗಿ ವಾಹನ ಹಾಗೂ ಮದ್ಯ ಬಳಸಿರುವುದು ಕಂಡುಬಂದಿರುವುದಲ್ಲದೇ ಮಾಲೀಕತ್ವ ಕೋರಿ ಯಾರೂ ಮುಂದೆ ಬಂದಿಲ್ಲವಾದ ಕಾರಣ ಪ್ರಕರಣವನ್ನು 43 ಸಿ ನಂತೆ ಮುಕ್ತಾಯಗೊಳಿಸಲು ಕೋರಿರುತ್ತಾರೆ. ಇವರ ವಾದಕ್ಕೆ ಮನ್ನಣೆ ಸಿಗಬೇಕಾಗಿದ್ದು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: 293/2001-2002 ದಿನಾಂಕ: 3ನೇ ಡಿಸೆಂಬರ್ 2004**

ಶ್ರೀ ಎನ್. ಬಿ. ಖೋಜಾ, ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ಆದ ನಾನು ಅಬಕಾರಿ ಕಾಯ್ದೆ ಕಲಂ 43 ಸಿ ಅಡಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಸಬ್ ಇನ್ಸ್‌ಪೆಕ್ಟರ್, ಬೆಳಗಾಂ ಉಪ ವಿಭಾಗ ಇವರ ಮೊಕದ್ದಮೆ ಸಂಖ್ಯೆ: 13/2001-02 ದಿನಾಂಕ: 19.12.2001 ಈ ಪ್ರಕರಣದಲ್ಲಿ ಜಪ್ತಾದ ಮಾರುತಿ ಸುಜುಕಿ ಓಮಿನಿ ವಾಹನ ಸಂಖ್ಯೆ: ಕೆಎ-25-ಎಂ-4858 ಹಾಗೂ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸಿದ್ದೇನೆ.

ಈ ಆದೇಶವು ದಿನಾಂಕ: 3.12.2004 ರಿಂದ 30 ದಿನಗಳ ನಂತರ ಜಾರಿಗೆ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ಬೆಳಗಾಂ ಜಿಲ್ಲೆ, ಬೆಳಗಾಂ.

ಪಿ.ಆರ್. 258

**ಪ್ರಾಧಿಕೃತ ಅಧಿಕಾರಿಗಳು ಮತ್ತು ಅಬಕಾರಿ ಅಧೀಕ್ಷಕರು, ಬೆಳಗಾಂ ಜಿಲ್ಲೆ, ಬೆಳಗಾಂ**
**ಪ್ರಕರಣ ಸಂ. ಇಎಕ್ಸ್೩: ಸಿಆರ್ಎಂ: ಡಿಟಿಸಿಆರ್:846/2002-03**

**ಫಿರ್ಯಾದುದಾರರು :** ಪಿ. ಎಸ್. ಐ. ಯಮಕನಮರ್ಡಿ ಪಿ. ಎಸ್.

**ವಿರುದ್ಧ :**

**ಅರ್ಜಿದಾರರು :** ತಿಳಿದಿಲ್ಲ.

ದಿನಾಂಕ: 08.6.2003 ರಂದು ಮಧ್ಯಾಹ್ನ 12.30 ಗಂಟೆ ಸಮಯದಲ್ಲಿ ರಾಷ್ಟ್ರೀಯ ಹೆದ್ದಾರಿ ನಂ.4 ಉತ್ತರ ಹಿಡಕಲ್ ಡ್ಯಾಮ್‌ಕ್ರಾಸ್ ಹತ್ತಿರ ಅಕ್ರಮವಾಗಿ 280.000 ಲೀ ಮದ್ಯಸಾರವನ್ನು ಮಹೇಂದ್ರ ಜೀಪ್ ಸಂ. ಎಂಹೆಚ್-09-9761 ರಲ್ಲಿ ಸಾಗಾಣಿಕೆ ಮಾಡುತ್ತಿದ್ದ ಆರೋಪದ ಮೇಲೆ ವಾಹನವನ್ನು ಮದ್ಯದೊಂದಿಗೆ ಜಪ್ತು ಮಾಡಿ ಪ್ರ.ವ.ವ ಸಂ. 101/03ನ್ನು ಅಬಕಾರಿ ಕಾಯ್ದೆ ಕಲಂ 32, 34, 38ಎ ರ ಉಲ್ಲಂಘನೆಗಾಗಿ ಕ್ರಮ ಜರುಗಿಸಲಾಗಿದೆ.

ಈ ಪ್ರಕರಣದಲ್ಲಿ ಲಭ್ಯವಿರುವ ದಾಖಲಾತಿಗಳು ಹಾಗೂ ಸಾಕ್ಷಾಧಾರಗಳನ್ನು ಪರಿಶೀಲಿಸಲಾಯಿತು. ಲಭ್ಯವಿರುವ ದಾಖಲಾತಿಗಳ ಆಧಾರದ ಮೇಲೆ ಮಾನ್ಯ ಎ.ಡಿ.ಪಿ.ಯವರು ತಮ್ಮ ವಾದವನ್ನು ಮಂಡಿಸುತ್ತ ಈ ಪ್ರಕರಣ ದಾಖಲಾಗಿ $1^1/_2$ ವರ್ಷ ಸಮಯ ಸಂದಿದ್ದು, ವಾಹನ ಮಾಲೀಕತ್ವದ ಬಗ್ಗೆ ಯಾರೂ ಇದುವರೆಗೂ ಮುಂದೆ ಬಾರದಿರುವುದರಿಂದ ಹಾಗೂ ತನಿಖಾಧಿಕಾರಿಗಳು ವಾಹನದ ಮಾಲೀಕತ್ವವನ್ನು ಮತ್ತು ಆರೋಪಿಗಳನ್ನು ಪತ್ತೆ ಹಚ್ಚಲು ತೆಗೆದುಕೊಂಡ ಕ್ರಮವನ್ನು, ಫಲಿತಾಂಶವನ್ನು ನಿವೇದಿಸಿದ್ದಾರೆ. ಪ್ರಾಧಿಕೃತ ಅಧಿಕಾರಿಗಳು ಸಾರಿಗೆ ಅಧಿಕಾರಿಗಳಿಂದ ಪಡೆದ ಮಾಹಿತಿ ಮೇರೆಗೆ ದೇವೇಂದ್ರ ಪೊನ್ನಪ್ಪ ಅಪ್ಪೇಕರ್, ಪೀರನವಾಡಿ, ಬೆಳಗಾಂ ತಾಲೂಕು ಇವರಿಗೆ ದಿನಾಂಕ: 10.8.2004 ರಂದು ಅಬಕಾರಿ ಕಾಯ್ದೆ ಕಲಂ 43ಬಿ ರಡಿಯಲ್ಲಿ ನೋಟೀಸನ್ನು ಜಾರಿ ಮಾಡಲಾಗಿರುತ್ತದೆ. ಸದರಿ ನೋಟೀಸಿಗೆ ಇದುವರೆಗೂ ವಾಹನದ ಮಾಲೀಕರು ಯಾವುದೇ ರೀತಿ ಪ್ರತಿಕ್ರಿಯೆಯನ್ನು ನೀಡಿರುವುದಿಲ್ಲ. ಪ್ರಕರಣವು ಪತ್ತೆಯಾಗಿ ಈಗಾಗಲೇ $1^1/_2$ ವರ್ಷಕ್ಕೂ ಮೇಲ್ಪಟ್ಟು ಅವಧಿ ಸಂದಿರುತ್ತದೆ.

ಅಬಕಾರಿ ಕಾಯ್ದೆ ಕಲಂ 43ಸಿ ರಡಿ 30 ದಿವಸಗಳ ಅವಧಿಯ ಪೂರ್ವದಲ್ಲಿ ಮಾಲೀಕತ್ವವನ್ನು ಕೋರಿ ಯಾರು ಮುಂದೆ ಬಾರದ ಪಕ್ಷದಲ್ಲಿ ಇಂತಹ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಕಾನೂನಿನ ಅಂಶವನ್ನು ಈ ಪ್ರಾಧಿಕಾರದ ಗಮನಕ್ಕೆ ತರುತ್ತ, ವಾಹನ ಮಾಲೀಕತ್ವವನ್ನು ಪತ್ತೆ ಹಚ್ಚಲು ತೆಗೆದುಕೊಂಡ ಕ್ರಮವನ್ನು ಪರಿಶೀಲಿಸಲು ಕೋರಿರುತ್ತಾರೆ.

ಮಾನ್ಯ ಎ.ಡಿ.ಪಿ.ರವರ ವಾದವನ್ನು ಕೇಳಲಾಗಿದೆ. ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ಮಾನ್ಯ ಎ.ಡಿ.ಪಿ.ಯವರ ವಾದದಲ್ಲಿ ಸತ್ಯಾಂಶವಿದ್ದು, ಮೇಲ್ಕಂಡ ಮಹೇಂದ್ರ ಜೀಪ್‌ನಲ್ಲಿ ಅಕ್ರಮವಾಗಿ 280.000 ಲೀ ಮದ್ಯಸಾರವನ್ನು ಸಾಗಿಸಲು ಅಬಕಾರಿ ಕಾಯ್ದೆ ಕಲಂ 32 ಮತ್ತು 34ನ್ನು ಉಲ್ಲಂಘಿಸಿರುವುದು ಲಭ್ಯ ಕಡತಗಳ ಆಧಾರ ಮಾನ್ಯ ಎ.ಡಿ.ಪಿ.ಯವರು ಮಂಡಿಸಿರುವ ವಾದ ಮತ್ತು ಕೃತ್ಯ ನಡೆದ ದಿನದಿಂದ ಇಲ್ಲಿಯವರೆಗೆ ವಾಹನ ಮಾಲಿಕತ್ವವನ್ನು ರುಜುವಾತುಪಡಿಸಲು ಯಾರು ಮುಂದೆ ಬಾರದಿರುವುದರಿಂದ ಮತ್ತು ತನಿಖಾಧಿಕಾರಿಗಳು ವಾಹನ ಮಾಲಿಕರನ್ನು ಪತ್ತೆ ಹಚ್ಚಲು ತೆಗೆದುಕೊಂಡ ಕ್ರಮ ಇವುಗಳನ್ನು ಪರಿಶೀಲಿಸಲಾಯಿತು. ಮಹೇಂದ್ರ ಜೀಪ್ ಸಂ. ಎಂಹೆಚ್-09-9761 ರಲ್ಲಿ ಅಬಕಾರಿ ಕಾಯ್ದೆ ಕಲಂ 32, 34 ನ್ನು ಉಲ್ಲಂಘಿಸಿ ಅಕ್ರಮವಾಗಿ 280.000 ಲೀ ಮದ್ಯಸಾರವನ್ನು ಸಾಗಿಸಲು ಉಪಯೋಗಿಸುತ್ತಿದ್ದು ಮೇಲ್ಕಂಡ ಅಂಶಗಳಿಂದ ಮೇಲ್ನೋಟಕ್ಕೆ ದೃಢಪಟ್ಟಿರುವುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಪ್ರಾಧಿಕಾರ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂ. 846/2002-2003**

ಎನ್. ಬಿ. ಖೋಜಾ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಬೆಳಗಾಂವ ಜಿಲ್ಲೆ, ಬೆಳಗಾಂ ಆದ ನಾನು 1965ರ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರ ಅಡಿಯಲ್ಲಿ ನನಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಈ ಮೊಕದ್ದಮೆಯಲ್ಲಿ ಜಪ್ತಾಗಿರುವ ಮದ್ಯಸಾರ 280.000 ಲೀ ಹಾಗೂ ವಾಹನ ಮಹೇಂದ್ರ ಜೀಪ್ ಸಂ. ಎಂಹೆಚ್-09-9761ನ್ನು 1965ರ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರೀತ್ಯ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸಿದ್ದೇನೆ.

ಈ ಆದೇಶವನ್ನು ದಿನಾಂಕ: 3.12.2004 ರಂದು ಉಕ್ತಲೇಖನ ನೀಡಿ ತಪ್ಪುಗಳನ್ನು ತಿದ್ದಿ ನಂತರ ಮುಕ್ತ ನ್ಯಾಯಾಲಯದಲ್ಲಿ ನನ್ನಿಂದ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ದಿನಾಂಕ: 3.12.2004 ರಿಂದ 30 ದಿನಗಳ ನಂತರ ಜಾರಿಗೆ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ಬೆಳಗಾಂ ಜಿಲ್ಲೆ, ಬೆಳಗಾಂ.

ಪಿ.ಆರ್. 259

**ಪ್ರಾಧಿಕೃತ ಅಧಿಕಾರಿಗಳು ಮತ್ತು ಅಬಕಾರಿ ಅಧೀಕ್ಷಕರು, ಬೆಳಗಾಂ ಜಿಲ್ಲೆ, ಬೆಳಗಾಂ**

**ಪ್ರಕರಣ ಸಂ. ಇಎಕ್ಸ್‌ಇ: ಸಿಆರ್‌ಎಂ: ಡಿಟಿಸಿಆರ್:509/2001-02**

**ಫಿರ್ಯಾದುದಾರರು :** ಅಬಕಾರಿ ಇನ್ಸ್‌ಪೆಕ್ಟರ್, ಬೈಲಹೊಂಗಲ ವಲಯ

**ವಿರುದ್ಧ :**

**ಅರ್ಜಿದಾರರು :** ತಿಳಿದಿಲ್ಲ.

ದಿನಾಂಕ: 16.04.2002 ರಂದು ಸಾಯಂಕಾಲ 7.00 ಗಂಟೆ ಸಮಯದಲ್ಲಿ ಬೈಲಹೊಂಗಲ ತಾಲ್ಲೂಕು ನಯಾನಗರ ಗ್ರಾಮದ ಹತ್ತಿರ ಅಕ್ರಮವಾಗಿ ರಹದಾರಿ ಇಲ್ಲದೆ 216.000 ಲೀ ಮದ್ಯವನ್ನು ಅಂಬಾಸಿಡರ್ ಕಾರ್ ನಂಬರ್ ಪ್ಲೇಟ್ ಇಲ್ಲದ ವಾಹನದಲ್ಲಿ ಸಾಗಾಣಿಕೆ ಮಾಡುತ್ತಿದ್ದ ಆರೋಪದ ಮೇಲೆ ವಾಹನವನ್ನು ಮದ್ಯದೊಂದಿಗೆ ಜಪ್ತು ಮಾಡಿ ಪ್ರ.ವ.ವ. ಸಂ. 11/01-02ನ್ನು ದಿನಾಂಕ: 16.04.2002 ರಂತೆ ಅಬಕಾರಿ ಕಾಯ್ದೆ ಕಲಂ 32, 34, 38ಎ ರ ಉಲ್ಲಂಘನೆಗಾಗಿ ಕ್ರಮ ಜರುಗಿಸಲಾಗಿದೆ. ಈ ಪ್ರಕರಣದಲ್ಲಿ ಲಭ್ಯವಿರುವ ದಾಖಲಾತಿಗಳು ಹಾಗೂ ಸಾಕ್ಷಾಧಾರಗಳನ್ನು ಪರಿಶೀಲಿಸಲಾಯಿತು. ಈ ಪ್ರಕರಣ ದಾಖಲಾಗಿ ಇಲ್ಲಿಯವರೆಗೆ $2^1/_2$ ವರ್ಷ ಹೆಚ್ಚಿನ ಸಮಯ ಸಂದಿದ್ದು, ವಾಹನದ ಮಾಲಿಕತ್ವವನ್ನು ಕೋರಿ ಯಾರೂ ಮುಂದೆ ಬಂದಿರುವುದಿಲ್ಲ. ಮಾನ್ಯ ಎ.ಡಿ.ಪಿ.ರವರು ತಮ್ಮ ವಾದವನ್ನು ಮಂಡಿಸುತ್ತ ತಮ್ಮ ಪರವಾಗಿ ಕೆಳಕಂಡ ದಾಖಲಾತಿಗಳನ್ನು ಈ ಪ್ರಾಧಿಕಾರದ ಗಮನಕ್ಕೆ ತಂದಿರುತ್ತಾರೆ.

1. ಪ್ರ.ವ.ವ.
2. ಮಹಜರ ಕ್ರಮ
3. ಮಾಲು ಪಟ್ಟಿ
4. ರಸಾಯನಿಕ ತಜ್ಞರ ವರದಿ

ಮೇಲ್ಕಂಡ ದಾಖಲಾತಿಗಳ ಆಧಾರದ ಮೇಲೆ ಮಾನ್ಯ ಎ.ಡಿ.ಪಿ.ಯವರು ತಮ್ಮ ವಾದವನ್ನು ಮಂಡಿಸುತ್ತ ಈ ಪ್ರಕರಣ ದಾಖಲಾಗಿ $2^1/_2$ ವರ್ಷ ಹೆಚ್ಚಿನ ಸಮಯ ಸಂದಿದ್ದು, ವಾಹನ ಮಾಲಿಕತ್ವದ ಬಗ್ಗೆ ಯಾರೂ ಇದುವರೆಗೂ ಮುಂದೆ ಬಾರದಿರುವುದರಿಂದ ಹಾಗೂ ತನಿಖಾಧಿಕಾರಿಗಳು ವಾಹನದ ಮಾಲಿಕತ್ವವನ್ನು ಮತ್ತು ಆರೋಪಿಗಳನ್ನು ಪತ್ತೆ ಹಚ್ಚಲು ತೆಗೆದುಕೊಂಡ ಕ್ರಮವನ್ನು, ಫಲಿತಾಂಶವನ್ನು ನಿವೇದಿಸಿದ್ದಾರೆ.

ಅಬಕಾರಿ ಕಾಯ್ದೆ ಕಲಂ 43ಸಿ ರಡಿ 30 ದಿವಸಗಳ ಅವಧಿಯ ಪೂರ್ವದಲ್ಲಿ ಮಾಲಿಕತ್ವವನ್ನು ಕೋರಿ ಯಾರೂ ಮುಂದೆ ಬಾರದ ಪಕ್ಷದಲ್ಲಿ ಇಂತಹ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಕಾನೂನಿನ ಅಂಶವನ್ನು ಈ ಪ್ರಾಧಿಕಾರದ ಗಮನಕ್ಕೆ ತರುತ್ತ, ವಾಹನ ಮಾಲಿಕತ್ವವನ್ನು ಪತ್ತೆ ಹಚ್ಚಲು ತೆಗೆದುಕೊಂಡ ಕ್ರಮವನ್ನು ಪರಿಶೀಲಿಸಲು ಕೋರಿರುತ್ತಾರೆ.

ಮಾನ್ಯ ಎ.ಡಿ.ಪಿ.ರವರ ವಾದವನ್ನು ಕೇಳಲಾಗಿದೆ. ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ಮಾನ್ಯ ಎ.ಡಿ.ಪಿ.ಯವರ ವಾದದಲ್ಲಿ ಸತ್ಯಾಂಶವಿದ್ದು, ಅಂಬಾಸಿಡರ್ ಕಾರ್ ನೋಂದಣಿ ಸಂಖ್ಯೆ ಇಲ್ಲದ ವಾಹನದಲ್ಲಿ ಅಬಕಾರಿ ಕಾಯ್ದೆ ಕಲಂ 32, 34ನ್ನು ಉಲ್ಲಂಘಿಸಿ ಅಕ್ರಮವಾಗಿ 216.000 ಲೀ ಮದ್ಯವನ್ನು ಸಾಗಿಸಲು ಉಪಯೋಗಿಸುತ್ತಿದ್ದು ಮೇಲ್ಕಂಡ ಅಂಶಗಳಿಂದ ಮೇಲ್ನೋಟಕ್ಕೆ ದೃಢಪಟ್ಟಿರುವುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಪ್ರಕರಣವನ್ನು 43ಸಿ ರಡಿ ಮುಕ್ತಾಯಗೊಳಿಸುವುದು ಸೂಕ್ತವೆಂದು ಕಂಡು ಬಂದ ಕಾರಣ ಈ ಕೆಳಕಂಡ ಆದೇಶ.

**ಆದೇಶ ಸಂ. 509/2001-2002**

ಎನ್. ಬಿ. ಖೋಜಾ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಬೆಳಗಾಂ ಜಿಲ್ಲೆ, ಬೆಳಗಾಂ ಆದ ನಾನು 1965ರ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರ ಅಡಿಯಲ್ಲಿ ನನಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಈ ಮೊಕದ್ದಮೆಯಲ್ಲಿ ಜಪ್ತಾಗಿರುವ 216.000 ಲೀ ಮದ್ಯ ಹಾಗೂ ನೋಂದಣಿ ಸಂಖ್ಯೆ ಇಲ್ಲದ ಅಂಬಾಸಿಡರ್ ಕಾರ್ ವಾಹನವನ್ನು 1965ರ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರೀತ್ಯ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸಿದ್ದೇನೆ.

ಈ ಆದೇಶವನ್ನು ದಿನಾಂಕ: 3.12.2004 ರಂದು ಉಕ್ತಲೇಖನ ನೀಡಿ ತಪ್ಪುಗಳನ್ನು ತಿದ್ದಿ ನಂತರ ಮುಕ್ತ ನ್ಯಾಯಾಲಯದಲ್ಲಿ ನನ್ನಿಂದ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ದಿನಾಂಕ: 3.12.2004 ರಿಂದ 30 ದಿನಗಳ ನಂತರ ಜಾರಿಗೆ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ಬೆಳಗಾಂ ಜಿಲ್ಲೆ, ಬೆಳಗಾಂ.

ಪಿ.ಆರ್. 260

**ಪ್ರಾಧಿಕೃತ ಅಧಿಕಾರಿಗಳು ಮತ್ತು ಅಬಕಾರಿ ಅಧೀಕ್ಷಕರು, ಬೆಳಗಾಂ ಜಿಲ್ಲೆ, ಬೆಳಗಾಂ**

**ಪ್ರಕರಣ ಸಂ. ಇಎಕ್ಸ್‌ಇ:ಸಿಆರ್‌ಎಂ: ಡಿಟಿಸಿಆರ್:490/2002-03**

**ಫಿರ್ಯಾದುದಾರರು :** ಅಬಕಾರಿ ಉಪ ನಿರೀಕ್ಷಕರು, ಚಿಕ್ಕೋಡಿ ಉಪ ವಿಭಾಗ

**ವಿರುದ್ಧ :**

**ಅರ್ಜಿದಾರರು :** ಬಿ. ರಂಗನಾಥ, 1ನೇ ಮೇನ್ ರೋಡ್, ಚಂದ್ರ ಲೇಔಟ್, ವಿಜಯನಗರ, ಬೆಂಗಳೂರು.

ದಿನಾಂಕ: 12.08.2002 ರಂದು ರಾತ್ರಿ 8.00 ಗಂಟೆಗೆ ಹುಕ್ಕೇರಿ ತಾಲ್ಲೂಕಿನ ಬಡಕುಂದ್ರಿ ಕ್ರಾಸ್ ಹತ್ತಿರ ವಾಹನ ಸಂ. ಕೆಎ-12-ಎ-5812 ಟ್ರಕ್ ಇದನ್ನು 6160.320 ಲೀ ಅಕ್ರಮ ಮದ್ಯ ಸಾಗಾಣಿಕೆ ಮಾಡುವ ಆರೋಪದ ಮೇಲೆ ಜಪ್ತು ಮಾಡಿ ಅಬಕಾರಿ ಕಾಯ್ದೆ ಕಲಂ 32, 34 ರಂತೆ ಕ್ರಮ ಜರುಗಿಸುವ ಸಲುವಾಗಿ ಮೊಕದ್ದಮೆ ಸಂ. 6/2002-03 ರಂತೆ ದಾಖಲಿಸಿರುತ್ತದೆ. ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಿ ಅಬಕಾರಿ ಕಾಯ್ದೆ ಕಲಂ ಉಲ್ಲಂಘನೆ ಮತ್ತು ಉಲ್ಲಂಘನೆಗಾಗಿ ವಾಹನ ಹಾಗೂ ಮದ್ಯ ಬಳಕೆಯಾಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುತ್ತದೆ. ದಿನಾಂಕ: 07.01.2003 ರಂದು ಶ್ರೀ ಬಿ. ರಂಗನಾಥ್ ಬಿನ್ ಭೀಮಣ್ಣ ಎಂಬುವವರು ಅರ್ಜಿಯೊಂದನ್ನು ಸಲ್ಲಿಸಿ ವಾಹನದ ಚಾಲಕರು ತನ್ನ ಸ್ವಂತ ಕಾರಣಗಳಿಗೆ ಮತ್ತು ವೈಯಕ್ತಿಕ ಲಾಭಕ್ಕೋಸ್ಕರ ಈ ವಾಹನವನ್ನು ಅಕ್ರಮ ಚಟುವಟಿಕೆಗಳಿಗೆ ಬಳಸಿರುವುದಾಗಿ ತಿಳಿಸುತ್ತ ಎಸಗಿರುವ ಕೃತ್ಯವನ್ನು ಒಪ್ಪಿಕೊಳ್ಳುತ್ತ ವಾಹನವನ್ನು ಮರಳಿ ಪಡೆಯುವ ಇಚ್ಛೆ ಇಲ್ಲವೆಂದು ತಿಳಿಸಿ, ವಾಹನವನ್ನು ನಿಯಮಾನುಸಾರ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಮಾನ್ಯ ಎ.ಡಿ.ಪಿ.ರವರು ಈ ಪ್ರಕರಣದಲ್ಲಿ ತಮ್ಮ ವಾದವನ್ನು ಮಂಡಿಸಿರುತ್ತಾರೆ. ಅವರು ಈ ಪ್ರಕರಣದಲ್ಲಿ ಲಭ್ಯವಿರುವ ಈ ಕೆಳಕಂಡ ದಾಖಲಾತಿಗಳತ್ತ ಈ ಪ್ರಾಧಿಕಾರದ ಗಮನವನ್ನು ಸೆಳೆದಿರುತ್ತಾರೆ.

1. ಪ್ರ.ವ.ವ.
2. ಪಂಚನಾಮೆ ಕ್ರಮ
3. ಮಾಲು ಪಟ್ಟಿ
4. ರಸಾಯನಿಕ ತಜ್ಞರ ವರದಿ ಮತ್ತು
5. ಕಲಂ 43ಬಿ ರಡಿ ನೀಡಿರುವ ಕಾರಣ ಕೇಳಿ ನೋಟೀಸ್

ದಿನಾಂಕ: 12.08.2002 ರಂದು ಫಿರ್ಯಾದುದಾರರು ಪಂಚರ ಸಮಕ್ಷಮ ವಾಹನವನ್ನು ಜಪ್ತು ಮಾಡಿರುವ ಕ್ರಮ, ವಾಹನದಲ್ಲಿ 6160.320 ಲೀ ಮದ್ಯ ಸಾಗಾಣಿಕೆ ಆಗುತ್ತಿದ್ದ ಅಂಶವನ್ನು ಲಾರಿಯಲ್ಲಿದ್ದ ದ್ರವವು ಮದ್ಯ ಎಂಬುದಾಗಿ ದಾಖಲಾತಿಗಳು ದೃಢೀಕರಿಸಿರುತ್ತವೆ. ಮತ್ತು ವಾಹನ ಮಾಲಿಕರೆಂದು ಘೋಷಿಸಿರುವ ಶ್ರೀ ಬಿ. ರಂಗನಾಥ ಇವರು ಸಹ ಒಪ್ಪಿರುತ್ತಾರೆ. ಈ ವಾಹನ ಚಾಲಕರಾದ ಆರೋಪಿಯು ತನ್ನ ಸ್ವಂತ ಮತ್ತು ವೈಯಕ್ತಿಕ ಕಾರಣಗಳಿಗಾಗಿ ವಾಹನವನ್ನು ಅಕ್ರಮ ಚಟುವಟಿಕೆಗಳಿಗೆ ಬಳಸಿಕೊಂಡಿರುವ ಬಗ್ಗೆ ಒಪ್ಪಿಕೊಂಡಿರುತ್ತಾರೆ. ಈ ಹಿನ್ನೆಲೆಯಲ್ಲಿ ವಾಹನ ಅಕ್ರಮ ಚಟುವಟಿಕೆಗಳಿಗೆ ಬಳಕೆಯಾಗಿರುವುದು ಮತ್ತು ಅಬಕಾರಿ ಕಾಯ್ದೆ ಕಲಂ 32ರ ಉಲ್ಲಂಘನೆಗೆ ಬಳಸಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದಲೂ ಕಡತದಲ್ಲಿ ಲಭ್ಯವಿರುವ ದಾಖಲಾತಿಗಳನ್ನು ವಾಹನ ಮಾಲೀಕರು ಒಪ್ಪಿಕೊಂಡಿರುವುದರಿಂದಲೂ ಈ ಪ್ರಕರಣವು ಕಲಂ 43ಎ ಯಡಿ ಮುಕ್ತಾಯಗೊಳಿಸುವುದು ಸೂಕ್ತವೆಂಬ ವಾದ ಮುಂದಿಟ್ಟಿರುತ್ತಾರೆ. ದಾಖಲಾತಿಗಳು ಹಾಗೂ ಅಬಕಾರಿ ಕಾಯ್ದೆ ಕಾನೂನನ್ನು ಪರಿಶೀಲಿಸಲಾಯಿತು. ಅಬಕಾರಿ ಕಾಯ್ದೆ ಕಲಂ 40ರ ಅಡಿಯಲ್ಲಿರುವ Presumption ಅಂದರೆ ಜಪ್ತಾದ ವಾಹನ ಮತ್ತು ಅಕ್ರಮ ಮದ್ಯ, ಅಬಕಾರಿ ಕಾಯ್ದೆ ಉಲ್ಲಂಘನೆಗೆ ಬಳಕೆಯಾಗಿದೆ ಎಂಬ ಅಂಶವನ್ನು ಅರ್ಜಿದಾರರ ಪರವಾಗಿ ನ್ಯಾಯಾಲಯ ಪರಿಗಣಿಸಬೇಕೆಂಬ ಕಾನೂನು ಫಿರ್ಯಾದುದಾರರ ಪರ ಇದ್ದು ಈ ಹಿನ್ನೆಲೆಯಲ್ಲಿ ಮಾನ್ಯ ಎ.ಡಿ.ಪಿ.ಯವರ ವಾದವನ್ನು ಮನ್ನಿಸಿ ಕೆಳಕಂಡ ಆದೇಶ.

**ಆದೇಶ ಸಂ: 490/2002-2003**

ಎನ್. ಬಿ. ಖೋಜಾ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ), ಬೆಳಗಾಂ ಜಿಲ್ಲೆ, ಬೆಳಗಾಂ ಆದ ನಾನು 1965ರ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಎ ರ ಅಡಿಯಲ್ಲಿ ನನಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಈ ಮೊಕದ್ದಮೆಯಲ್ಲಿ ಜಪ್ತು ಮಾಡಿರುವ ವಾಹನ ಟ್ರಕ್ ಸಂ. ಕೆಎ-12-ಎ-5812ನ್ನು 1965ರ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43 ಎ ರೀತ್ಯ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸಿದ್ದೇನೆ.

ಈ ಆದೇಶವನ್ನು ದಿನಾಂಕ: 3.12.2004 ರಂದು ಉಕ್ತಲೇಖನ ನೀಡಿ ತಪ್ಪುಗಳನ್ನು ತಿದ್ದಿ ನಂತರ ಮುಕ್ತ ನ್ಯಾಯಾಲಯದಲ್ಲಿ ನನ್ನಿಂದ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ದಿನಾಂಕ: 3.12.2004 ರಿಂದ 30 ದಿನಗಳ ನಂತರ ಜಾರಿಗೆ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ಬೆಳಗಾಂ ಜಿಲ್ಲೆ, ಬೆಳಗಾಂ.

ಪಿ.ಆರ್. 261

**ಪ್ರಾಧಿಕೃತ ಅಧಿಕಾರಿಗಳು ಮತ್ತು ಅಬಕಾರಿ ಅಧೀಕ್ಷಕರು, ಬೆಳಗಾಂ ಜಿಲ್ಲೆ ಬೆಳಗಾಂ**

**ಪ್ರಕರಣ ಸಂ. ಇಎಕ್ಸ್‌ಇ:ಸಿಆರ್‌ಎಂ: ಡಿಟಿಸಿಆರ್:409/2001-02**

**ಫಿರ್ಯಾದುದಾರರು :** ಎಎಸ್‌ಐ ಬೈಲಹೊಂಗಲ ಪಿಎಸ್

**ವಿರುದ್ಧ :**

**ಅರ್ಜಿದಾರರು :** ತಿಳಿದಿಲ್ಲ

ದಿನಾಂಕ: 13.02.2002 ರಂದು ಬೆಳಿಗ್ಗೆ 5.00 ಗಂಟೆ ಸಮಯದಲ್ಲಿ ಬೈಲಹೊಂಗಲ ಪಟ್ಟಣದ ಗದಗ ಪೆಟ್ರೋಲ್ ಪಂಪ್ ಹತ್ತಿರ ಅಕ್ರಮವಾಗಿ 285.120ಲೀ ಮದ್ಯವನ್ನು ಕಾರ್ ಎಂವೈಸಿ-1181 ರಲ್ಲಿ ಸಾಗಾಣಿಕೆ ಮಾಡುತ್ತಿದ್ದ ಆರೋಪದ ಮೇಲೆ ವಾಹನವನ್ನು ಮದ್ಯದೊಂದಿಗೆ ಜಪ್ತು ಮಾಡಿ ಪ್ರ.ವ.ವ. ಸಂ. 26/02ನ್ನು ದಿನಾಂಕ: 13.02.2002 ರಂತೆ ಅಬಕಾರಿ ಕಾಯ್ದೆ ಕಲಂ 32, 34, 38ಎರ ಉಲ್ಲಂಘನೆಗಾಗಿ ಕ್ರಮ ಜರುಗಿಸಲಾಗಿದೆ. ಈ ಪ್ರಕರಣದಲ್ಲಿ ಲಭ್ಯವಿರುವ ದಾಖಲಾತಿಗಳು ಹಾಗೂ ಸಾಕ್ಷಾಧಾರಗಳನ್ನು ಪರಿಶೀಲಿಸಲಾಯಿತು. ಈ ಪ್ರಕರಣ ದಾಖಲಾಗಿ ಇಲ್ಲಿಯವರೆಗೆ $2^1/_2$ ವರ್ಷ ಹೆಚ್ಚಿನ ಸಮಯ ಸಂದಿದ್ದು, ವಾಹನದ ಮಾಲಿಕತ್ವವನ್ನು ಕೋರಿ ಯಾರೂ ಮುಂದೆ ಬಂದಿರುವುದಿಲ್ಲ. ಮಾನ್ಯ ಎ.ಡಿ.ಪಿ.ರವರು ತಮ್ಮ ವಾದವನ್ನು ಮಂಡಿಸುತ್ತ ತಮ್ಮ ಪರವಾಗಿ ಕೆಳಕಂಡ ದಾಖಲಾತಿಗಳನ್ನು ಈ ಪ್ರಾಧಿಕಾರದ ಗಮನಕ್ಕೆ ತಂದಿರುತ್ತಾರೆ.

1. ಪ್ರ.ವ.ವ
2. ಮಹಜರು ಕ್ರಮ
3. ಮಾಲುಪಟ್ಟಿ
4. ರಸಾಯನಿಕ ತಜ್ಞರ ವರದಿ

ಮೇಲ್ಕಂಡ ದಾಖಲಾತಿಗಳ ಆಧಾರದ ಮೇಲೆ ಮಾನ್ಯ ಎ.ಡಿ.ಪಿ.ಯವರು ತಮ್ಮ ವಾದವನ್ನು ಮಂಡಿಸುತ್ತ ಈ ಪ್ರಕರಣ ದಾಖಲಾಗಿ $2^1/_2$ ವರ್ಷ ಹೆಚ್ಚಿನ ಸಂದಿದ್ದು, ವಾಹನ ಮಾಲಿಕತ್ವದ ಬಗ್ಗೆ ಯಾರೂ ಇದುವರೆಗೂ ಮುಂದೆ ಬಾರದಿರುವುದರಿಂದ ಹಾಗೂ ತನಿಖಾಧಿಕಾರಿಗಳು ವಾಹನದ ಮಾಲಿಕತ್ವವನ್ನು ಮತ್ತು ಆರೋಪಿಗಳನ್ನು ಪತ್ತೆ ಹಚ್ಚಲು ತೆಗೆದುಕೊಂಡ ಕ್ರಮವನ್ನು, ಫಲಿತಾಂಶವನ್ನು ನಿವೇದಿಸಿದ್ದಾರೆ.

ಈ ಪ್ರಕರಣದಲ್ಲಿ ಲಭ್ಯವಿರುವ ದಾಖಲಾತಿಗಳು ಹಾಗೂ ಸಾಕ್ಷಾಧಾರಗಳನ್ನು ಪರಿಶೀಲಿಸಲಾಯಿತು. ವಾಹನದ ಮಾಲಿಕರಿಗೆ ದಿನಾಂಕ: 2.12.2002 ರಂದು ಕಾರಣ ಕೇಳಿ ನೋಟಿಸನ್ನು ಜಾರಿ ಮಾಡಲಾಗಿತ್ತು. ಸದರಿ ಕಾರಣ ಕೇಳಿ ನೋಟೀಸಿಗೆ ಯಾವುದೇ ಉತ್ತರವನ್ನು ಅರ್ಜಿದಾರರು ನೀಡಿರುವುದಿಲ್ಲ.

ಅಬಕಾರಿ ಕಾಯ್ದೆ ಕಲಂ 43ಸಿ ರಡಿ 30 ದಿವಸಗಳ ಅವಧಿಯ ಪೂರ್ವದಲ್ಲಿ ಮಾಲಿಕತ್ವವನ್ನು ಕೋರಿ ಯಾರು ಮುಂದೆ ಬಾರದ ಪಕ್ಷದಲ್ಲಿ ಇಂತಹ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಕಾನೂನಿನ ಅಂಶವನ್ನು ಈ ಪ್ರಾಧಿಕಾರದ ಗಮನಕ್ಕೆ ತರುತ್ತ, ವಾಹನ ಮಾಲಿಕತ್ವವನ್ನು ಪತ್ತೆ ಹಚ್ಚಲು ತೆಗೆದುಕೊಂಡ ಕ್ರಮವನ್ನು ಪರಿಶೀಲಿಸಲು ಕೋರಿರುತ್ತಾರೆ.

ಮಾನ್ಯ ಎ.ಡಿ.ಪಿ.ರವರ ವಾದವನ್ನು ಕೇಳಲಾಗಿದೆ. ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ಮಾನ್ಯ ಎ.ಡಿ.ಪಿ.ಯವರ ವಾದದಲ್ಲಿ ಸತ್ಯಾಂಶವಿದ್ದು, ಕಾರ್ ಸಂ. ಎಂವೈಸಿ-1181 ರಲ್ಲಿ ಅಬಕಾರಿ ಕಾಯ್ದೆ ಕಲಂ 32, 34ನ್ನು ಉಲ್ಲಂಘಿಸಿ ಅಕ್ರಮವಾಗಿ 285.120 ಲೀ ಮದ್ಯವನ್ನು ಸಾಗಿಸಲು ಉಪಯೋಗಿಸುತ್ತಿದ್ದು ಮೇಲ್ಕಂಡ ಅಂಶಗಳಿಂದ ಮೇಲ್ನೋಟಕ್ಕೆ ದೃಢಪಟ್ಟಿರುವುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಪ್ರಕರಣವನ್ನು 43ಸಿ ರಡಿ ಮುಕ್ತಾಯಗೊಳಿಸುವುದು ಸೂಕ್ತವೆಂದು ಕಂಡು ಬಂದ ಕಾರಣ ಈ ಕೆಳಕಂಡ ಆದೇಶ

**ಆದೇಶ ಸಂ. ಇಎಕ್ಸ್‌ಇ:ಸಿಆರ್‌ಎಂ:ಡಿಟಿಸಿಆರ್:409:2001-2002**

ಎನ್. ಬಿ. ಖೋಜಾ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಬೆಳಗಾಂ ಜಿಲ್ಲೆ, ಬೆಳಗಾಂ ಆದ ನಾನು 1965ರ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರ ಅಡಿಯಲ್ಲಿ ನನಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಈ ಮೊಕದ್ದಮೆಯಲ್ಲಿ ಜಪ್ತಾಗಿರುವ 285.120 ಲೀ.ಮದ್ಯ ಹಾಗೂ ವಾಹನ ಕಾರ್ ನಂ. ಎಂವೈಸಿ-1181ನ್ನು 1965ರ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರೀತ್ಯ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸಿದ್ದೇನೆ.

ಈ ಆದೇಶವನ್ನು ದಿನಾಂಕ: 3.12.2004 ರಂದು ಉಕ್ತಲೇಖನ ನೀಡಿ ತಪ್ಪುಗಳನ್ನು ತಿದ್ದಿ ನಂತರ ಮುಕ್ತ ನ್ಯಾಯಾಲಯದಲ್ಲಿ ನನ್ನಿಂದ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ದಿನಾಂಕ: 3.12.2004 ರಿಂದ 30 ದಿನಗಳ ನಂತರ ಜಾರಿಗೆ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ಬೆಳಗಾಂ ಜಿಲ್ಲೆ, ಬೆಳಗಾಂ.

ಪಿ.ಆರ್. 262

**ಪ್ರಾಧಿಕೃತ ಅಧಿಕಾರಿಗಳು ಮತ್ತು ಅಬಕಾರಿ ಅಧೀಕ್ಷಕರು, ಬೆಳಗಾಂ ಜಿಲ್ಲೆ, ಬೆಳಗಾಂ**

**ಪ್ರಕರಣ ಸಂ. ಇಎಕ್ಸ್‌ಇ:ಸಿಆರ್‌ಎಂ: ಡಿಟಿಸಿಆರ್:495/2002-03**

**ಫಿರ್ಯಾದುದಾರರು :** ಅಬಕಾರಿ ನಿರೀಕ್ಷಕರು, ಇಐಬಿ, ಬೆಳಗಾಂ

**ವಿರುದ್ಧ :**

**ಅರ್ಜಿದಾರರು :** ತಿಳಿದಿಲ್ಲ

ದಿನಾಂಕ: 09.08.2002 ರಂದು ಸಂಜೆ 6.00 ಗಂಟೆ ಸಮಯದಲ್ಲಿ ಬೈಲಹೊಂಗಲದಿಂದ ಬೆಳಗಾಂಗೆ ಬರುವ ರಸ್ತೆಯ ಬೈಲವಾಡ ಕ್ರಾಸಿನ ಹತ್ತಿರ ಅಕ್ರಮವಾಗಿ 630.720 ಲೀ ಮದ್ಯವನ್ನು ಹಳೆಯ ಟ್ರಕ್ ಸಂ. ಕೆಎ-04-4282 ರಲ್ಲಿ ಸಾಗಾಣಿಕೆ ಮಾಡುತ್ತಿದ್ದ ಆರೋಪದ ಮೇಲೆ ವಾಹನವನ್ನು

ಮದ್ಯದೊಂದಿಗೆ ಜಪ್ತು ಮಾಡಿ ಪ್ರ.ವ.ವ. ಸಂ. 7/02-03 ನ್ನು ದಿನಾಂಕ: 09.08.2002ರ ಅಬಕಾರಿ ಕಾಯ್ದೆ ಕಲಂ 32, 34, 38ಎ ರ ಉಲ್ಲಂಘನೆಗಾಗಿ ಕ್ರಮ ಜರುಗಿಸಲಾಗಿದೆ. ಈ ಪ್ರಕರಣದಲ್ಲಿ ಲಭ್ಯವಿರುವ ದಾಖಲಾತಿಗಳು ಹಾಗೂ ಸಾಕ್ಷಾಧಾರಗಳನ್ನು ಪರಿಶೀಲಿಸಲಾಯಿತು. ಈ ಪ್ರಕರಣ ದಾಖಲಾಗಿ ಇಲ್ಲಿಯವರೆಗೆ 2 ವರ್ಷಗಳಿಗೂ ಹೆಚ್ಚಿನ ಸಮಯ ಸಂದಿದೆ. ವಾಹನದ ಮಾಲಿಕತ್ವವನ್ನು ಕೋರಿ ಯಾರು ಮುಂದೆ ಬಂದಿರುವುದಿಲ್ಲ ಮಾನ್ಯ ಎ.ಡಿ.ಪಿ.ರವರು ತಮ್ಮ ವಾದವನ್ನು ಮಂಡಿಸುತ್ತ ತಮ್ಮ ಪರವಾಗಿ ಕೆಳಕಂಡ ದಾಖಲಾತಿಗಳನ್ನು ಈ ಪ್ರಾಧಿಕಾರದ ಗಮನಕ್ಕೆ ತಂದಿರುತ್ತಾರೆ.

1. ಪ್ರ.ವ.ವ
2. ಮಹಜರ ಕ್ರಮ
3. ಮಾಲು ಪಟ್ಟಿ
4. ರಾಸಾಯನಿಕ ತಜ್ಞರ ವರದಿ

ಮೇಲ್ಕಂಡ ದಾಖಲಾತಿಗಳ ಆಧಾರದ ಮೇಲೆ ಮಾನ್ಯ ಎ.ಡಿ.ಪಿ.ಯವರು ತಮ್ಮ ವಾದವನ್ನು ಮಂಡಿಸುತ್ತ ಈ ಪ್ರಕರಣ ದಾಖಲಾಗಿ 2 ವರ್ಷಗಳಿಗೂ ಹೆಚ್ಚಿನ ಸಮಯ ಸಂದಿದ್ದು ವಾಹನ ಮಾಲಿಕತ್ವದ ಬಗ್ಗೆ ಯಾರೂ ಇದುವರೆಗೂ ಮುಂದೆ ಬಾರದಿರುವುದರಿಂದ ಹಾಗೂ ತನಿಖಾಧಿಕಾರಿಗಳು ವಾಹನದ ಮಾಲಿಕತ್ವವನ್ನು ಮತ್ತು ಆರೋಪಿಗಳನ್ನು ಪತ್ತೆ ಹಚ್ಚಲು ತಗೆದುಕೊಂಡ ಕ್ರಮವನ್ನು, ಫಲಿತಾಂಶವನ್ನು ನಿವೇದಿಸಿದ್ದಾರೆ. ಅಬಕಾರಿ ಕಾಯ್ದೆ ಕಲಂ 43ಸಿ ರಡಿ 30 ದಿವಸಗಳ ಅವಧಿಯ ಪೂರ್ವದಲ್ಲಿ ಮಾಲಿಕತ್ವವನ್ನು ಕೋರಿ ಯಾರು ಮುಂದೆ ಬಾರದ ಪಕ್ಷದಲ್ಲಿ ಇಂತಹ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಕಾನೂನಿನ ಅಂಶವನ್ನು ಈ ಪ್ರಾಧಿಕಾರದ ಗಮನಕ್ಕೆ ತರುತ್ತ, ವಾಹನ ಮಾಲಿಕತ್ವವನ್ನು ಪತ್ತೆ ಹಚ್ಚಲು ತೆಗೆದುಕೊಂಡ ಕ್ರಮವನ್ನು ಪರಿಶೀಲಿಸಲು ಕೋರಿರುತ್ತಾರೆ.

ಮಾನ್ಯ ಎ.ಡಿ.ಪಿ.ರವರ ವಾದವನ್ನು ಕೇಳಲಾಗಿದೆ. ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ಮಾನ್ಯ ಎ.ಡಿ.ಪಿ.ಯವರ ವಾದದಲ್ಲಿ ಸತ್ಯಾಂಶವಿದ್ದು, ಈ ಪ್ರಕರಣವನ್ನು 43ಸಿ ರಡಿ ಮುಕ್ತಾಯಗೊಳಿಸುವುದು ಸೂಕ್ತವೆಂದು ಕಂಡು ಬಂದ ಕಾರಣ ಈ ಕೆಳಕಂಡ ಆದೇಶ

**ಆದೇಶ ಸಂ. 495:2002-2003**

ಎನ್. ಬಿ. ಖೋಜಾ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಬೆಳಗಾಂ ಜಿಲ್ಲೆ, ಬೆಳಗಾಂ ಆದ ನಾನು 1965ರ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರ ಅಡಿಯಲ್ಲಿ ನನಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಈ ಮೊಕದ್ದಮೆಯಲ್ಲಿ ಜಪ್ತಾಗಿರುವ ವಾಹನ ಟ್ರಕ್ ಸಂ. ಕೆಎ-04-4282ನ್ನು 1965ರ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರೀತ್ಯ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸಿದ್ದೇನೆ.

ಈ ಆದೇಶವನ್ನು ದಿನಾಂಕ: 3.12.2004 ರಂದು ಉಕ್ತಲೇಖನ ನೀಡಿ ತಪ್ಪುಗಳನ್ನು ತಿದ್ದಿ ನಂತರ ಮುಕ್ತ ನ್ಯಾಯಾಲಯದಲ್ಲಿ ನನ್ನಿಂದ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ದಿನಾಂಕ: 3.12.2004 ರಿಂದ 30 ದಿನಗಳ ನಂತರ ಜಾರಿಗೆ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ಬೆಳಗಾಂ ಜಿಲ್ಲೆ, ಬೆಳಗಾಂ.

ಪಿ.ಆರ್. 263

**ಪ್ರಾಧಿಕೃತ ಅಧಿಕಾರಿಗಳು ಮತ್ತು ಅಬಕಾರಿ ಅಧೀಕ್ಷಕರು, ಬೆಳಗಾಂ ಜಿಲ್ಲೆ, ಬೆಳಗಾಂ**

**ಪ್ರಕರಣ ಸಂ. ಇಎಕ್ಸ್ಇ:ಸಿಆರ್ಎಂ: ಡಿಟಿಸಿಆರ್:625/2002-03**

**ಫಿರ್ಯಾದುದಾರರು :** ಅಬಕಾರಿ ನಿರೀಕ್ಷಕರು, ಇಐಬಿ, ಬೆಳಗಾಂ

**ವಿರುದ್ಧ :**

**ಆರ್ಜಿದಾರರು :** ತಿಳಿದಿಲ್ಲ

ದಿನಾಂಕ: 08.11.2002 ರಂದು ಮುಂಜಾನೆ 1.30 ಗಂಟೆ ಸಮಯದಲ್ಲಿ ಎಂ.ಕೆ. ಹುಬ್ಬಳ್ಳಿಯಿಂದ ಬೈಲಹೊಂಗಲಕ್ಕೆ ಬರುವ ರಸ್ತೆ ಮೇಲೆ ಬರುವ ಯಡಾಲ ಕ್ರಾಸಿನ ಹತ್ತಿರ ಅಕ್ರಮವಾಗಿ 5272.900 ಲೀ ಮದ್ಯವನ್ನು ಅಶೋಕ ಲೈಲಾಂಡ್ ಟ್ರಕ್ ಸಂ. ಸಿಎಎ-4425 ರಲ್ಲಿ ಸಾಗಾಣಿಕೆ ಮಾಡುತ್ತಿದ್ದ ಆರೋಪಿದ ಮೇಲೆ ವಾಹನವನ್ನು ಮದ್ಯದೊಂದಿಗೆ ಜಪ್ತು ಮಾಡಿ ಪ್ರ.ವ.ವ ಸಂ. 8/02-03ನ್ನು ದಿನಾಂಕ: 08.11.2002ರ ಅಬಕಾರಿ ಕಾಯ್ದೆ ಕಲಂ 32, 34, 38ಎರ ಉಲ್ಲಂಘನೆಗಾಗಿ ಕ್ರಮ ಜರುಗಿಸಲಾಗಿದೆ. ಈ ಪ್ರಕರಣದಲ್ಲಿ ಲಭ್ಯವಿರುವ ದಾಖಲಾತಿಗಳು ಹಾಗೂ ಸಾಕ್ಷಾಧಾರಗಳನ್ನು ಪರಿಶೀಲಿಸಲಾಯಿತು. ಈ ಪ್ರಕರಣ ದಾಖಲಾಗಿ ಇಲ್ಲಿಯವರೆಗೆ 2 ವರ್ಷಗಳಿಗೂ ಹೆಚ್ಚಿನ ಸಮಯ ಸಂದಿದೆ ವಾಹನದ ಮಾಲಿಕತ್ವವನ್ನು ಕೋರಿ ಯಾರು ಮುಂದೆ ಬಂದಿರುವುದಿಲ್ಲ. ಮಾನ್ಯ ಎ.ಡಿ.ಪಿ.ರವರು ತಮ್ಮ ವಾದವನ್ನು ಮಂಡಿಸುತ್ತ ಫಿರ್ಯಾದುದಾರರ ಪರವಾಗಿ ಕೆಳಕಂಡ ದಾಖಲಾತಿಗಳನ್ನು ಈ ಪ್ರಾಧಿಕಾರದ ಗಮನಕ್ಕೆ ತಂದಿರುತ್ತಾರೆ.

1. ಪ್ರ.ವ.ವ
2. ಮಹಜರ ಕ್ರಮ.
3. ಮಾಲು ಪಟ್ಟಿ

ಮೇಲ್ಕಂಡ ದಾಖಲಾತಿಗಳ ಆಧಾರದ ಮೇಲೆ ಮಾನ್ಯ ಎ.ಡಿ.ಪಿ.ಯವರು ತಮ್ಮ ವಾದವನ್ನು ಮಂಡಿಸುತ್ತ ಈ ಪ್ರಕರಣ ದಾಖಲಾಗಿ 2 ವರ್ಷಗಳಿಗೂ ಹೆಚ್ಚಿನ ಸಮಯ ಸಂದಿದ್ದು ವಾಹನ ಮಾಲಿಕತ್ವದ ಬಗ್ಗೆ ಯಾರೂ ಇದುವರೆಗೂ ಮುಂದೆ ಬಾರದಿರುವುದರಿಂದ ಹಾಗೂ ತನಿಖಾಧಿಕಾರಿಗಳು ವಾಹನದ ಮಾಲಿಕತ್ವವನ್ನು ಮತ್ತು ಆರೋಪಿಗಳನ್ನು ಪತ್ತೆ ಹಚ್ಚಲು ತಗೆದುಕೊಂಡ ಕ್ರಮವನ್ನು, ಫಲಿತಾಂಶವನ್ನು ನಿವೇದಿಸಿದ್ದಾರೆ. ಅಬಕಾರಿ ಕಾಯ್ದೆ ಕಲಂ 43ಸಿ ರಡಿ 30 ದಿವಸಗಳ ಅವಧಿಯ ಪೂರ್ವದಲ್ಲಿ ಮಾಲಿಕತ್ವವನ್ನು ಕೋರಿ ಯಾರು ಮುಂದೆ ಬಾರದ ಪಕ್ಷದಲ್ಲಿ ಇಂತಹ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಕಾನೂನಿನ ಅಂಶವನ್ನು ಈ ಪ್ರಾಧಿಕಾರದ ಗಮನಕ್ಕೆ ತರುತ್ತ, ವಾಹನ ಮಾಲಿಕತ್ವವನ್ನು ಪತ್ತೆ ಹಚ್ಚಲು ತೆಗೆದುಕೊಂಡ ಕ್ರಮವನ್ನು ಪರಿಶೀಲಿಸಲು ಕೋರಿರುತ್ತಾರೆ.

ಮಾನ್ಯ ಎ.ಡಿ.ಪಿ.ರವರ ವಾದವನ್ನು ಕೇಳಲಾಗಿದೆ. ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ಮಾನ್ಯ ಎ.ಡಿ.ಪಿ.ಯವರ ವಾದದಲ್ಲಿ ಸತ್ಯಾಂಶವಿದ್ದು, ಈ ಪ್ರಕರಣವನ್ನು 43ಸಿ ರಡಿ ಮುಕ್ತಾಯಗೊಳಿಸುವುದು ಸೂಕ್ತವೆಂದು ಕಂಡು ಬಂದ ಕಾರಣ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: 625/2002-2003**

ಎನ್. ಬಿ. ಖೋಜಾ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಎಕ್ಸೈಜ್ (ಪ್ರಭಾರ) ಬೆಳಗಾಂ ಜಿಲ್ಲೆ, ಬೆಳಗಾಂ ಆದ ನಾನು 1965ರ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರ ಅಡಿಯಲ್ಲಿ ನನಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಈ ಮೊಕದ್ದಮೆಯಲ್ಲಿ ಜಪ್ತು ಮಾಡಿರುವ 5272.900 ಲೀ (ರಸಾಯನಿಕ ಪರೀಕ್ಷೆಗೆ ತೆಗೆದಿರುವ ಮಾದರಿಯನ್ನು ಹೊರತುಪಡಿಸಿ) ಮದ್ಯ ಹಾಗೂ ವಾಹನ ಅಶೋಕ್ ಲೈಲಾಂಡ್ ಟ್ರಕ್ ಸಂಖ್ಯೆ: ಸಿಎಎ-4425ನ್ನು 1965ರ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರೀತ್ಯ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸಿದ್ದೇನೆ.

ಈ ಆದೇಶವನ್ನು ದಿನಾಂಕ: 3.12.2004 ರಂದು ಉಕ್ತಲೇಖನ ನೀಡಿ ತಪ್ಪುಗಳನ್ನು ತಿದ್ದಿ ನಂತರ ಮುಕ್ತ ನ್ಯಾಯಾಲಯದಲ್ಲಿ ನನ್ನಿಂದ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ದಿನಾಂಕ: 3.12.2004 ರಿಂದ 30 ದಿನಗಳ ನಂತರ ಜಾರಿಗೆ ಬರುವುದು.

ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ಬೆಳಗಾಂ ಜಿಲ್ಲೆ, ಬೆಳಗಾಂ.

ಪಿ.ಆರ್. 264

**ಪೊಲೀಸ್ ಕಮೀಷನರ್ ರವರ ಕಛೇರಿ, ನಂ. 1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ: 4/ಸಂವಿ:ಸಿಓಪಿ:2005 ದಿನಾಂಕ: 31ನೇ ಜನವರಿ, 2005**

ಬೆಂಗಳೂರು ನಗರದಲ್ಲಿನ ಪ್ರತಿಷ್ಠಿತ ರಸ್ತೆಗಳಲ್ಲಿ ಒಂದಾದ ಮಹಾತ್ಮಗಾಂಧಿ ರಸ್ತೆಯ (ಎಂ.ಜಿ. ರಸ್ತೆ) ಒಂದು ಭಾಗದಲ್ಲಿ ಸರ್ಕಾರಿ ಕಛೇರಿಗಳನ್ನು ಒಳಗೊಂಡಂತೆ ಬಹುಸಂಖ್ಯೆಯಲ್ಲಿ ವಾಣಿಜ್ಯ ಮಳಿಗೆಗಳನ್ನು ಹೊಂದಿದ್ದು ನಗರದ ದೇಶೀಯ ಮತ್ತು ವಿದೇಶಿ ಪ್ರವಾಸಿಗರನ್ನು ಆಕರ್ಷಿಸುವ ರಸ್ತೆಯಾಗಿರುತ್ತೆ. ಪ್ರಸ್ತುತ ಈ ರಸ್ತೆಯ ದಕ್ಷಿಣ ಭಾಗದಲ್ಲಿ ಲಘು ವಾಹನಗಳನ್ನು ಆಂಗ್ಯುಲರ್ ಪಾರ್ಕಿಂಗ್ ಮಾಡಲಾಗುತ್ತಿದೆ. ಈ ರಸ್ತೆಯಲ್ಲಿನ ವಾಹನ ದಟ್ಟಣೆಗೆ ರಸ್ತೆಯ ಅಗಲವು ಅನುಗುಣವಾಗಿ ಇಲ್ಲದೇ ಇರುವ ಪ್ರಯುಕ್ತ ಸಂಚಾರ ಸುಗಮವಾಗಿ ಸಾಗದೆ ಸ್ಥಗಿತಗೊಳ್ಳುತ್ತಿರುತ್ತೆ. ಪ್ರಯುಕ್ತ ಈ ರಸ್ತೆಯಲ್ಲಿನ ಆಂಗ್ಯುಲರ್ ಪಾರ್ಕಿಂಗ್ ಅನ್ನು ಪ್ಯಾರಲಲ್ ಪಾರ್ಕಿಂಗ್‌ಗೆ ಮಾರ್ಪಡಿಸಿ ಸಾರ್ವಜನಿಕ ವಾಹನಗಳ ಮತ್ತು ಪಾದಚಾರಿಗಳ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವುದು ಅವಶ್ಯಕವಾಗಿರುತ್ತೆ.

ಆದ್ದರಿಂದ ಎಸ್. ಮರಿಸ್ವಾಮಿ ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಭಾರತೀಯ ಮೋಟಾರ್ ವಾಹನ ಕಾಯ್ದೆ 1988 ರ ಕಲಂ 115 ಹಾಗೂ ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಕಾಯ್ದೆ 1960ರ ಕಲಂ 3ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಸಂಚಾರ ನಿರ್ಬಂಧವನ್ನು ವಿಧಿಸಿದ್ದೇನೆ.

"ಮಹಾತ್ಮಗಾಂಧಿ ರಸ್ತೆಯಲ್ಲಿ (ಎಂ.ಜಿ. ರಸ್ತೆ) ಪ್ರಸ್ತುತ ಜಾರಿಯಲ್ಲಿರುವ ಆಂಗ್ಯುಲರ್ ಪಾರ್ಕಿಂಗ್ ಅನ್ನು ನಿಷೇಧಿಸಿ ಪ್ಯಾರೆಲಲ್ ಪಾರ್ಕಿಂಗ್‌ಗೆ ಅವಕಾಶ ಮಾಡಿಕೊಡಲಾಗಿದೆ"

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 07.02.2005 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 31.01.2005 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**
ಪೊಲೀಸ್ ಕಮೀಷನರ್, ಬೆಂಗಳೂರು ನಗರ.

ಪಿ.ಆರ್. 267

**BHARADWAJ ENGINEERING CO. (P) LTD**

**Regd & H.O. # 50, Byraveshwara Indl. Estate, Heganahally, Andrahalli Main Road, Bangalore-560 091**

**FORM No. 155**

**(See Rule 329)**

**THE COMPANIES (COURT) RULES, 1957**

**Members Voluntary Winding Up**

**Name of Company: Bharadwaj Engineering Company Private Limited**

**Notice convening final Meeting.**

Notice is hereby given in pursuance of section 497 that a General meeting of the Members of the above named company will be held at the Registered Office at No. 50, Byraveshwara Indl Estate, Near Peenya II Stage, Hegganahalli, Andrahalli Main Road, Bangalore-560 091, on Friday the 15th April, 2005 at 11.00 A.M. for the purpose of having an account laid before them showing the manner in which the winding up has been conducted and the assets of the Company disposed of and of hearing any explanation that may be given by the liquidator and also of determinig by a special resolution of the Company, the manner in which the books, accounts and documents of the company and of the liquidator shall be disposed of.

Signature of the Liquidator
**VIVEK KUMAR**

PD-11